# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **15 (27)**
ಸದಸ್ಯರ ಹೆಸರು : ಶ್ರೀ. ಎಸ್ ಎಲ್ ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 07.12.2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ದಿನಾಂಕ:01/08/2008ರ ನಂತರ ನೇರನೇಮಕತಿ ಹೊಂದಿದ ಸರ್ಕಾರಿ ಮತ್ತು ಅನುದಾನಿತ ಪ್ರೌಢಶಾಲಾ ಶಿಕ್ಷಕರ ಸಂಖ್ಯೆ ಹಾಗೂ ಅನುದಾನಿತ ಪದವಿ ಪೂರ್ವ ಕಾಲೇಜುಗಳ ಸಂಖ್ಯೆ ಎಷ್ಟು; | ಸರ್ಕಾರಿ ಪ್ರೌಢಶಾಲಾ ಶಿಕ್ಷಕರ ಸಂಖ್ಯೆ: 7736<br>ಅನುದಾನಿತ ಪ್ರೌಢಶಾಲಾ ಶಿಕ್ಷಕರ ಸಂಖ್ಯೆ: 4563<br>**ಒಟ್ಟು 12299**<br>**ಪದವಿ ಪೂರ್ವ ಉಪನ್ಯಾಸಕರ ಸಂಖ್ಯೆ**<br>ಸರ್ಕಾರಿ ಉಪನ್ಯಾಸಕರ ಸಂಖ್ಯೆ **5320**<br>ಅನುದಾನಿತ ಉಪನ್ಯಾಸಕರ ಸಂಖ್ಯೆ **2551** |
| ಆ. | ಸದರಿ ಶಿಕ್ಷಕರು ಹಾಗೂ ಉಪನ್ಯಾಸಕರಿಗೆ ವಿಶೇಷ ಭತ್ಯೆಯ ಮಂಜೂರಾಗದೆ ತಾರತಮ್ಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಈ ಶಿಕ್ಷಕರು ಮತ್ತು ಉಪನ್ಯಾಸಕರಿಗೆ ವಿಶೇಷ ಭತ್ಯೆ ಮಂಜೂರಾಗದಿರುವುದು ಸರ್ಕಾರದ ಗಮನದಲ್ಲಿದೆ |
| ಇ. | ಸದರಿ ಶಿಕ್ಷಕರು ಮತ್ತು ಉಪನ್ಯಾಸಕರಿಗೆ ಈಗಾಗಲೇ ಮಂಜೂರಾಗಿರುವ ವಿಶೇಷ ಭತ್ಯೆಯನ್ನು ವಸೂಲು ಮಾಡುವಂತೆ ಸರ್ಕಾರವು ಆದೇಶಿಸುವುದು ಸಮಂಜಸವೇ; | ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರ ವರದಿ ಸ್ಥಳೀಯ ಸಂಸ್ಥೆಗಳು, ಇವರ ಮಾರ್ಚ್ 2017ಕ್ಕೆ ಕೊನೆಗೊಂಡ ವರದಿಯ ಕಂಡಿಕೆ 2.1ರಲ್ಲಿ ಸರ್ಕಾರದ ಆದೇಶಗಳಿಗೆ ವಿರುದ್ಧವಾಗಿ ಬಟವಾಡೆ ಅಧಿಕಾರಿಗಳು ದಿನಾಂಕ:01/08/2008ರ ನಂತರ ನೇಮಕಗೊಂಡ ಶಿಕ್ಷಕರುಗಳಿಗೆ ವಿಶೇಷ ಭತ್ಯೆಯನ್ನು ಪಾವತಿಸಿದ್ದು, ಸದರಿ ಮೊತ್ತವನ್ನು (ಪ್ರಾಥಮಿಕ ರೂ.1.27 ಮತ್ತು ರೂ.ಪ್ರೌಢ–5.13 ಕೋಟಿ) ಪಾವತಿಸಿರುವ ಬಗ್ಗೆ ಆಕ್ಷೇಪಣೆ ವ್ಯಕ್ತಪಡಿಸಿ ಈಮೊತ್ತವನ್ನು ಸಂಬಂಧಿಸಿದ ಶಿಕ್ಷಕರಿಂದ ವಸೂಲು ಮಾಡಲು ತಿಳಿಸಿ ಆಕ್ಷೇಪಣೆಯನ್ನು ಮಾಡಿದ್ದಾರೆ.<br><br>ಕೆಲವು ಬಟವಾಡೆ ಅಧಿಕಾರಿಗಳು ದಿನಾಂಕ:01/08/2008ರ ನಂತರ ನೇಮಕಗೊಂಡ ಶಿಕ್ಷಕರಿಗೆ ಸರ್ಕಾರದ ಆದೇಶಗಳಿಗೆ ವಿರುದ್ಧವಾಗಿ ವಿಶೇಷ ಭತ್ಯೆಯನ್ನು ಮಂಜೂರು ಮಾಡಿರುವುದು ನಿಯಮಬಾಹಿರವಾಗಿರುವುದರಿಂದ ಈ ರೀತಿ ಹೆಚ್ಚುವರಿಯಾಗಿ ನೀಡಿರುವ ಮೊತ್ತವನ್ನು ವಸೂಲಿ ಮಾಡಲು ಆದೇಶಿಸಿದೆ. |
| ಈ. | ಘನವೆತ್ತ ನ್ಯಾಯಾಲಯ ಮತ್ತು ಕರ್ನಾಟಕ ಮೇಲ್ಮನವಿ ನ್ಯಾಯಮಂಡಳಿಯಿಂದ ದಿನಾಂಕ:01/08/2008ರ ನಂತರ ನೇಮಕಾತಿಗೊಂಡ ಶಿಕ್ಷಕರು ಹಾಗೂ ಉಪನ್ಯಾಸಕರುಗಳಿಗೆ ವಿಶೇಷ ಭತ್ಯೆ | ಬಂದಿರುವುದಿಲ್ಲ. |

| | | |
|---|---|---|
| | ನೀಡುವುದು ಸಮಂಜಸವೆಂದು ಹೇಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಊ. | ಹಾಗಿದ್ದಲ್ಲಿ, ಸರ್ಕಾರವು ಸದರಿ ಶಿಕ್ಷಕರು ಮತ್ತು ಉಪನ್ಯಾಸಕರಿಗೆ ಮಂಜೂರಾಗಿರುವ ವಿಶೇಷ ಭತ್ಯೆಯನ್ನು ಎಂದಿನಿಂದ ಮುಂದುವರೆಸಲಾಗುವುದು? (ಪೂರ್ಣ ಮಾಹಿತಿ ನೀಡುವುದು). | ಉದ್ಭವಿಸುವುದಿಲ್ಲ. |

ಸಂಖ್ಯೆ: ಇಪಿ 210 ಎಸ್‌ಎಲ್‌ಬಿ 2020

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು